ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಸೋಮವಾರ, ದಿನಾಂಕ : 07 ನೇ ಡಿಸೆಂಬರ್, 2020

ಉನ್ನತ ಶಿಕ್ಷಣ ಇಲಾಖೆಯ ಖಾಲಿ ಹುದ್ದೆಗಳ ಭರ್ತಿಗೆ ಆರ್ಥಿಕ ಮಿತವ್ಯಯ ಸಡಿಲಿಕೆ ಕುರಿತು

ಶ್ರೀ ಅರುಣ ಶಹಾಪುರ(ಶಿಕ್ಷಕರ ಕ್ಷೇತ್ರ) –

05 (05) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಅನುದಾನಿತ ಪದವಿ ಕಾಲೇಜುಗಳಲ್ಲಿ ಖಾಲಿ ಹುದ್ದೆ ಭರ್ತಿ ಮಾಡುವ ಕುರಿತು ಆರ್ಥಿಕ ಇಲಾಖೆಯು ಆರ್ಥಿಕ ಮಿತವ್ಯಯದ ಆದೇಶ ಹೊರಡಿಸಿ ಹುದ್ದೆ ಭರ್ತಿ ಮಾಡುವುದನ್ನು ತಡೆಹಿಡಿಯಲಾಗಿದೆಯೇ;

(ಆ) ಹಾಗಿದ್ದಲ್ಲಿ, ಪ್ರಸ್ತುತ ಎಷ್ಟು ಹುದ್ದೆಗಳನ್ನು ಭರ್ತಿ ಮಾಡಲು ಅನುಮತಿ ನೀಡಲಾಗಿತ್ತು; (ಪದವಿ ಕಾಲೇಜುಗಳ ಹುದ್ದೆವಾರು ವಿವರ ನೀಡುವುದು)

(ಇ) ಈಗಾಗಲೇ ಶಿಕ್ಷಣ ಸಂಸ್ಥೆಗಳು ಹುದ್ದೆಗಳನ್ನು ಇಲಾಖೆಯ ನಿಯಮಗಳಿಗನುಗುಣವಾಗಿ ಅಧಿಸೂಚನೆ ಹೊರಡಿಸಿ, ನೇಮಕ ಮಾಡಿ ವೇತನ ಪಡೆಯುವ ಹಂತಕ್ಕೆ ಬಂದಿರುವ ಪ್ರಸ್ತಾವನೆಗಳ ಸಂಖ್ಯೆ ಎಷ್ಟು ಮತ್ತು ಅವು ಯಾವುವು; (ಶಿಕ್ಷಣ ಸಂಸ್ಥೆವಾರು ಪದವಿ ಕಾಲೇಜುಗಳ ವಿವರ ನೀಡುವುದು)

(ಈ) ಹುದ್ದೆಗಳನ್ನು ಭರ್ತಿ ಮಾಡಲು ಆರ್ಥಿಕ ಇಲಾಖೆಯ ಅನುಮತಿ ದೊರೆತಿರುವ ಹುದ್ದೆಗಳ ಸಂಖ್ಯೆ ಎಷ್ಟು; ಅವು ಯಾವುವು; (ಶಿಕ್ಷಣ ಸಂಸ್ಥೆವಾರು ವಿವರ ನೀಡುವುದು)

(ಉ) ಆರ್ಥಿಕ ಇಲಾಖೆಯು ಹೊರಡಿಸಿರುವ ಆರ್ಥಿಕ ಮಿತವ್ಯಯದ ಆದೇಶವನ್ನು ಹಿಂಪಡೆಯುವಂತೆ ಅಥವಾ ಸಡಿಲಗೊಳಿಸುವಂತೆ ಈಗಾಗಲೇ ಪ್ರಸ್ತಾವನೆಯನ್ನು ಉನ್ನತ ಶಿಕ್ಷಣ ಇಲಾಖೆಯು ಮಂಡಿಸಿದೆಯೇ; ಮಂಡಿಸಿದ್ದಲ್ಲಿ, ಸದರಿ ಪ್ರಸ್ತಾವನೆಯು ಯಾವ ಹಂತದಲ್ಲಿದೆ; (ಈ ಕುರಿತು ಬಂದಿರುವ ಶಿಫಾರಸ್ಸುಗಳ ಪ್ರತಿ ನೀಡುವುದು)

(ಊ) ಈ ಆದೇಶವನ್ನು ಸಡಿಲಗೊಳಿಸಿ ಖಾಲಿ ಹುದ್ದೆಗಳ ಭರ್ತಿಗೆ ಹಾಗೂ ವೇತನದ ಹಂತಕ್ಕೆ ಬಂದ ಪ್ರಸ್ತಾವನೆಗಳನ್ನು ಅನುಮೋದಿಸಿ ವೇತನ ಬಿಡುಗಡೆಗೊಳಿಸಲು ಸರ್ಕಾರ ಕೈಗೊಂಡ ಕ್ರಮಗಳೇನು?